

# ಕರ್ನಾಟಕ ವಿಧಾನ ಪರಿಷತ್

**ಸದಸ್ಯರ ಹೆಸರು** : ಶ್ರೀ ಗೋವಿಂದರಾಜು (ವಿಧಾನ ಸಭೆಯಿಂದ ಚುನಾಯಿತರಾದವರು)

**ಚುಕ್ಕಿಗುರುತಿಲ್ಲದ ಪ್ರಶ್ನೆ ಸಂಖ್ಯೆ** : **419**

**ಉತ್ತರಿಸಬೇಕಾದ ದಿನಾಂಕ** : **15.09.2021.**

**ಉತ್ತರಿಸಬೇಕಾದ ಸಚಿವರು** : ಮಾನ್ಯ ಪಶುಸಂಗೋಪನೆ ಸಚಿವರು.

| ಕ್ರಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಕೋಳಿ ಸಾಕಾಣಿಯನ್ನು ಕೃಷಿ ಎಂದು ಪರಿಗಣಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | 1961 ರ ಕರ್ನಾಟಕ ಭೂ ಸುಧಾರಣೆ ಕಾಯಿದೆ 2(1)(ಡಿ)ಅಡಿಯಲ್ಲಿ ಕೋಳಿ ಸಾಕಾಣಿಕೆಯನ್ನು ಕೃಷಿ ಚಟುವಟಿಕೆ ಎಂದು ವ್ಯಾಖ್ಯಾನಿಸಲಾಗಿದೆ.<br><br>**ಅನುಬಂಧ-1** ರಲ್ಲಿ ನೀಡಲಾಗಿದೆ. |
| ಆ | ಹಾಗಿದ್ದಲ್ಲಿ, ಕೋಳಿ ಸಾಕಾಣಿಕೆಯನ್ನು ರಾಜ್ಯದಾದ್ಯಂತ ರೈತರು ಉಪ ಕಸುಬನ್ನಾಗಿ ಹಾಗೂ ಕೆಲವು ರೈತರು ಗರಿಷ್ಠ ಪ್ರಮಾಣದಲ್ಲಿ ಕೋಳಿ ಸಾಕಾಣಿಕ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಇ | ಕೋಲಾರ ಜಿಲ್ಲೆಯಂತಹ ಕೃಷಿ ಆಧಾರಿತ ಜಿಲ್ಲೆಗಳಲ್ಲಿ ಕೋಳಿ ಸಾಕಾಣಿಕೆಯನ್ನು ಉತ್ತೇಜಿಸಲು ಸರ್ಕಾರ ಯಾವುದಾದರೂ ವಿಶೇಷ ಯೋಜನೆಗಳನ್ನು ರೂಪಿಸಿದೆಯೇ; ಹಾಗಿದ್ದಲ್ಲಿ, ವಿಶೇಷ ಯೋಜನೆಗಳ ಸಂಪೂರ್ಣ ಮಾಹಿತಿಯನ್ನು ನೀಡುವುದು; | **ಅನುಬಂಧ-2** ರಲ್ಲಿ ನೀಡಲಾಗಿದೆ. |
| ಈ | ರೈತರು ಕೋಳಿ ಸಾಕಾಣಿಕೆಯನ್ನು ಮಾಡಲು ವಿಶೇಷ ಬಡ್ಡಿ ದರದಲ್ಲಿ ಸರ್ಕಾರ ಹಾಗೂ ಸಹಕಾರ ಬ್ಯಾಂಕುಗಳಿಂದ ಸಾಲ ಸೌಲಭ್ಯ ಪಡೆಯಲು ಸರ್ಕಾರ ಕ್ರಮ ಕೈಗೊಳ್ಳುವುದೇ; | ರಾಜ್ಯ ಸರ್ಕಾರದಿಂದ ಕೋಳಿ ಸಾಕಾಣಿಕೆಗೆ ವಿಶೇಷ ಬಡ್ಡಿ ದರದಲ್ಲಿ ಸಾಲ ನೀಡುವ ಯಾವುದೇ ಯೋಜನೆಗಳು ಇರುವುದಿಲ್ಲ. ಅದರೆ, ಕೇಂದ್ರ ಸರ್ಕಾರವು ಎನ್‌ಎಲ್‌ಎಂ ಯೋಜನೆಯಡಿಯಲ್ಲಿ ಉದ್ಯಮ ಶೀಲತೆಯ ಸ್ಥಾಪನೆಗಾಗಿ ಯೋಜನೆಯ ವೆಚ್ಚಕ್ಕಾಗಿ 50% ಬಂಡವಾಳ ಸಹಾಯಧನವನ್ನು ಪೋಷಕ ಕೋಳಿ ಫಾರಂ (Parent Farm), ಗ್ರಾಮೀಣ ಹ್ಯಾಚರಿ ಮತ್ತು ಮಾತೃ ಕೋಳಿ ಅನ್ನು ಕನಿಷ್ಟ 1000 ಪೋಷಕ ಮೊಟ್ಟೆ ಕೋಳಿಗಳು ಗ್ರಾಮೀಣ / ಕೋಳಿ ಸಾಕಣಿಕೆಯ ಉದ್ಯಮಶೀಲತೆಯ ಸ್ಥಾಪನೆಗಾಗಿ ನೀಡುತ್ತದೆ. |

| | | |
|---|---|---|
| ಉ | ಹಾಗಿದ್ದಲ್ಲಿ, ಯಾವ ಯಾವ ಬ್ಯಾಂಕುಗಳಲ್ಲಿ ಸಾಲ ಸೌಲಭ್ಯವನ್ನು ಪಡೆಯಬಹುದಾಗಿದೆ; ವಿವರಗಳನ್ನು ನೀಡುವುದು; | ರಾಷ್ಟ್ರೀಕೃತ / ಸಹಕಾರಿ / ಷೆಡ್ಯೂಲ್ / ಖಾಸಗಿ / ನಬಾರ್ಡ್ ಬ್ಯಾಂಕುಗಳ ಮುಖಾಂತರ ಆಯ್ಕೆಯಾದ ಫಲಾನುಭವಿಗಳು ಸಾಲ ಸೌಲಭ್ಯವನ್ನು ಪಡೆಯಬಹುದಾಗಿದೆ. |
| ಊ | ಕೋಳಿ ಸಾಕಾಣಿಕ ಕೇಂದ್ರಗಳಲ್ಲಿ ಕೋಳಿಗಳಿಗೆ ಬರುವ ಕೆಲವು ಖಾಯಿಲೆಗಳನ್ನು ಪರೀಕ್ಷಿಸಲು ಜಿಲ್ಲಾ ಕೇಂದ್ರಗಳಲ್ಲಿ ವ್ಯವಸ್ಥಿತವಾದ ಪ್ರಯೋಗಾಲಯಗಳನ್ನು ತೆರೆಯುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಈಗಾಗಲೇ 12 ಜಿಲ್ಲೆಗಳಾದ ಬಾಗಲಕೋಟೆ, ಬೆಳಗಾವಿ, ಬೀದರ, ಬಳ್ಳಾರಿ, ದಾವಣಗೆರೆ, ಗುಲ್ಬರ್ಗ, ಕೋಲಾರ, ಮಂಗಳೂರು, ಮೈಸೂರು, ಶಿವಮೊಗ್ಗ, ಶಿರಾ (ತುಮಕೂರು), ಶಿರಸಿ ಹಾಗೂ ಬೆಂಗಳೂರು ನಗರ ಇಲ್ಲಿ ಪ್ರಯೋಗಾಲಯಗಳು ಕಾರ್ಯನಿರ್ವಹಿಸುತ್ತಿವೆ. |
| ಋ | ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗಾಗಿ ಈ ಪ್ರಯೋಗಾಲಯಗಳನ್ನು ಪ್ರಾರಂಭಿಸಲಾಗುವುದು? (ವಿವರಗಳನ್ನು ನೀಡುವುದು) | ಕಟ್ಟಡ ಕಾಮಗಾರಿ ಹಂತದಲ್ಲಿರುವ ಐದು ಜಿಲ್ಲೆಗಳಾದ ಧಾರವಾಡ, ಕೊಪ್ಪಳ, ವಿಜಯಪುರ, ರಾಯಚೂರು ಮತ್ತು ಗದಗ ಪ್ರಯೋಗಾಲಯಗಳನ್ನು ಪ್ರಸ್ತುತ ಸಾಲಿನಲ್ಲಿ ಅಂದರೆ 2021-22 ರಲ್ಲಿ ಪ್ರಾರಂಭಿಸಲಾಗುವುದು.<br><br>ಇನ್ನುಳಿದ 13 ಜಿಲ್ಲೆಗಳಲ್ಲಿ ಹಂತ-ಹಂತವಾಗಿ ಪ್ರಯೋಗಾಲಯಗಳನ್ನ ತೆರೆಯಲು ಕ್ರಮವಹಿಸಲಾಗುವುದು ಕಾರ್ಯಮಿತಿ ನಿಗದಿಯಾಗಿರುವುದಿಲ್ಲ. |

**ಪಸಂಮೀ ಇ-227 ಸಲೆವಿ 2021**

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ ಸಚಿವರು,

**[1][KARNATAKA ACT][1] No. 10 OF 1962.**

(*First published in the* [1][Karnataka Gazette][1] *on the Fifteenth day of March, 1962.*)

**THE [1][KARNATAKA][1] LAND REFORMS ACT, 1961.**

(*Received the assent of the President on the Fifth day of March, 1962.*)

(As amended by Karnataka Acts 14 of 1965, 38 of 1966, 1 & 5 of 1967, 11 of 1968, 6 of 1970, 4 of 1972, 2 of 1973, 1, 26 & 31 of 1974, 18, 27, 44 & 67 of 1976, 12 & 23 of 1977, 1 of 1979, 2 of 1980, 3 of 1982, 1 of 1983, 35 of 1985, 19 of 1986, 18 of 1990, 1 & 31 1991, 9 of 1992, 31 of 1995, 8 of 1996, 23, 34 of 1998, 22 of 2001, 20 of 2003, 34 of 2003, 18 of 2004, 7 of 2005 and 17 of 2005)

**An Act to enact a uniform law relating to land reforms in the [1][State of Karnataka][1].**

WHEREAS it is expedient to enact a uniform law in the [1][State of Karnataka][1] relating to agrarian relations, conferment of ownership on tenants, ceiling on land holdings and for certain other matters hereinafter appearing;

BE it enacted by the [1][Karnataka State][1] Legislature in the Twelfth Year of the Republic of India as follows:—

1. Adapted by the Karnataka Adaptations of Laws Order, 1973 w.e.f 1.11.1973.

## CHAPTER I

### PRELIMINARY

**1. Short title, extent and commencement.**—(1) This Act may be called the [1][Karnataka][1] Land Reforms Act, 1961.

1. Adapted by the Karnataka Adaptations of Laws Order, 1973 w.e.f.1.11.1973.

(2) It extends to the whole of the [1][State of Karnataka][1].

1. Adapted by the Karnataka Adaptations of Laws Order, 1973 w.e.f.1.11.1973.

(3) It shall come into force on such [2][date][2] as the State Government may, by notification, appoint.

1. Act came into force by notification w.e.f. 2.10.1965. Text of notification is at the end of this Act.

**2. Definitions.**—(A) In this Act, unless the context otherwise requires,—

[1][(1) "agriculture" includes,—

[1][(*a*) acquaculture;][1]

1. Item (a) inserted by Act 31 of 1995 w.e.f. 20.10.1995.

[1][(*aa*)][1] horticulture;

1. Renumbered by Act 31 of 1995 w.e.f. 20.10.1995

(*b*) the raising of crops, grass or garden produce;

(*c*) dairy farming;

(*d*) poultry farming;

(*e*) breeding of livestock;

(*f*) grazing;

but does not include the cutting of wood only;][1]

1. Substituted by Act 1 of 1974 w.e.f. 01.03.1974.

(2) "agricultural labourer" means a person whose principal means of livelihood is manual labour on land [1][and includes an artisan whose principal means of livelihood is preparation of agricultural implements][1];

1. Inserted by Act 3 of 1982 w.e.f. 6.3.1982.

(3) "agriculturist" means a person who cultivates land personally;

[1][(4) "Amendment Act" means the [2][Karnataka][2] Land Reforms (Amendment) Act, 1973;][1]

1. substituted by Act 1 of 1974 w.e.f. 1.3.1974.

2. Adapted by the Karnataka Adaptations of Laws Order, 1973 w.e.f.1.11.1973

[1][(4A) x x x][1]

1. Inserted by Act 19 of 1986 w.e.f. 6.12.1985 and Omitted by Act 18 of 1990 w.e.f 8.10.1990..

(5) "appointed day" means the date appointed under sub-section (3) of section 1;

[1][(5A) "Assistant Commissioner" means an Assistant Commissioner appointed under the Karnataka Land Revenue Act, 1964 and includes a Special Assistant Commissioner for Land Reforms and an Additional Special Assistant Commissioner for Land Reforms appointed by the State Government to exercise all or any of the powers of the Assistant Commissioner under this Act;][1]

1.Inserted by Act 1 of 1979 w.e.f. 1.3.1974.

[1][(6) x x x][1]

1. Omitted by Act 1 of 1974 w.e.f. 1.3.1974.

[1][(7) "ceiling area" means the extent of land which a person or family is entitled to hold under section 63;][1]

1. Substituted by Act 1 of 1974 w.e.f. 1.3.1974.

(8) "co-operative society" means a co-operative society as defined in the [1][Karnataka][1] Co-operative Societies Act, 1959;

1. Adapted by the Karnataka Adaptations of Laws Order, 1973 w.e.f.1.11.1973.

(6)

**ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಗೋವಿಂದರಾಜು (ವಿಧಾನ ಸಭೆಯಿಂದ ಚುನಾಯಿತರಾದವರು) ಇವರು ಸದನದಲ್ಲಿ ಮಂಡಿಸಿರುವ ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ: 419 ಕ್ಕೆ**

**ಅನುಬಂಧ-2**

ಪ್ರಾದೇಶಿಕ ಪ್ರಯೋಗ ಶಾಲೆ, ಬಂಗಾರಪೇಟೆ, ಇಲ್ಲಿ ಕೋಳಿ ಸಾಕಾಣಿಕೆ ಕೇಂದ್ರವನ್ನು ಪುನರುಜ್ಜೀವನಗೊಳಿಸಿ ಮಾತೃ ಕೋಳಿಗಳಿಂದ ಮೊಟ್ಟೆ ಹಾಗೂ ಮರಿ ಉತ್ಪಾದನೆ ಮಾಡಿ ಜಿಲ್ಲೆಯ ರೈತರಿಗೆ ವಿತರಿಸಲು ಕ್ರಮವಹಿಸಲಾಗಿದೆ.

ರಾಜ್ಯದಲ್ಲಿ ವಿಶೇಷವಾಗಿ ಕೋಲಾರ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ರೈತರು ಕೋಳಿ ಸಾಕಾಣಿಕೆಯನ್ನು ತಮ್ಮ ಉಪಕಸುಬನ್ನಾಗಿ ಮಾಡಿಕೊಂಡಿರುತ್ತಾರೆ. ಜಿಲ್ಲೆಯಲ್ಲಿ 488 ಬ್ರಾಯ್ಲರ್ (ಮಾಂಸದ) ಕೋಳಿ/ಫಾರಂಗಳು ಹಾಗೂ 123 ಲೇಯರ್ಸ್ (ಮೊಟ್ಟೆ ಇಡುವ) ಕೋಳಿ ಫಾರಂಗಳು ಇದ್ದು, ಬ್ರಾಯ್ಲರ್ (ಮಾಂಸದ) ಕೋಳಿ ಫಾರಂಗಳಲ್ಲಿ ಅಂದಾಜು 1998140 ಕೋಳಿಗಳನ್ನು ಹಾಗೂ ಲೇಯರ್ಸ್ (ಮೊಟ್ಟೆ ಇಡುವ) ಕೋಳಿ ಫಾರಂಗಳಲ್ಲಿ ಅಂದಾಜು 3595200 ಕೋಳಿಗಳನ್ನು ಸಾಕಾಣಿಕೆ ಮಾಡಲಾಗುತ್ತಿದೆ.

ಬ್ರಾಯ್ಲರ್ (ಮಾಂಸದ) ಖಾಸಗಿ ಕೋಳಿ ಫಾರಂಗಳ ಮಾಲೀಕರು ಕೋಳಿಗಳನ್ನು ಸಾಕಲು ಹಾಗೂ ಮಾರಾಟ ಮಾಡಲು ವಿವಿಧ ಕಂಪನಿಗಳಿಂದ ಒಡಂಬಡಿಕೆ ಮಾಡಿಕೊಂಡು ತಮ್ಮ ತಮ್ಮ ಕೋಳಿ ಫಾರಂಗಳಲ್ಲಿ ಕೋಳಿ ಸಾಕಾಣಿಕೆ ಮಾಡುತ್ತಿದ್ದಾರೆ.

ಲೇಯರ್ಸ್ (ಮೊಟ್ಟೆ ಇಡುವ) ಕೋಳಿ ಫಾರಂಗಳಲ್ಲಿ ಮಾಲೀಕರು ಮರಿ ಮಾಡುವ ಕೋಳಿ ಮೊಟ್ಟೆಗಳು ಹಾಗೂ ಸೇವಿಸುವ ಕೋಳಿ ಮೊಟ್ಟೆಗಳ ಕೋಳಿ ಸಾಕಾಣಿಕೆ ಮಾಡಲು ನಿರ್ದಿಷ್ಟ ಕಂಪನಿಗಳೊಂದಿಗೆ ಒಡಂಬಡಿಕೆ/ಒಪ್ಪಂದ ಮಾಡಿಕೊಂಡು ಸಾಕಾಣಿಕೆ ಮಾಡುತ್ತಿದ್ದಾರೆ.

ಇಲಾಖೆಯಿಂದ ಹಿತ್ತಲ ಕೋಳಿ ಸಾಕಾಣಿಕೆಗೆ ಉತ್ತೇಜನ ನೀಡಲು 2019-20ನೇ ಸಾಲಿನಲ್ಲಿ ಗಿರಿರಾಜ ಕೋಳಿ ಮರಿಗಳ ಸಾಕಾಣಿಕೆ ಯೋಜನೆಯಡಿ ಸುಮಾರು 12500 ಆರು ವಾರಗಳ ಗಿರಿರಾಜ ಕೋಳಿ ಮರಿಗಳನ್ನು ಜಿಲ್ಲೆಯಲ್ಲಿ 30 ಜಿಲ್ಲಾ ಪಂಚಾಯತ್ ಸದಸ್ಯರುಗಳ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ಇತರೆ ವರ್ಗದ ಫಲಾನುಭವಿಗಳಿಗೆ ತಲಾ 5 ಕೋಳಿ ಮರಿಗಳಂತೆ ಒಟ್ಟು 1250 ಫಲಾನುಭವಿಗಳಿಗೆ 12500 ಕೋಳಿ ಮರಿಗಳನ್ನು ವಿತರಣೆ ಮಾಡಲಾಗಿದೆ.

2020-21ನೇ ಸಾಲಿನಲ್ಲಿ ಹಿತ್ತಲ ಕೋಳಿ ಸಾಕಾಣಿಕೆಗೆ ಉತ್ತೇಜನ ನೀಡಲು ವಿಸ್ತರಣಾ ಘಟಕಗಳ ಬಲವರ್ಧನೆಗಾಗಿ ಜಿಲ್ಲಾ ಪಂಚಾಯತ್ 30 ಸದಸ್ಯರುಗಳ ಕ್ಷೇತ್ರ ವ್ಯಾಪ್ತಿಯಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ಇತರೆ ವರ್ಗದ 1200 ಫಲಾನುಭವಿಗಳಿಗೆ ತಲಾ 5 ರಂತೆ ಒಟ್ಟು 6000 ಆರು ವಾರಗಳ ಗಿರಿರಾಜ ಕೋಳಿ ಮರಿಗಳನ್ನು ವಿತರಣೆ ಮಾಡಲಾಗಿದೆ. ಜಿಲ್ಲೆಯ ಎಲ್ಲಾ ಹಿತ್ತಲ ಕೋಳಿಗಳಿಗೆ ಪ್ರತಿ ವರ್ಷ ಎರಡು ಬಾರಿ ಕೊಕ್ಕರೆ ರೋಗದ ವಿರುದ್ಧ ಲಸಿಕೆ ಹಾಕಲಾಗುತ್ತಿದೆ.

ಕೋಲಾರ ಜಿಲ್ಲೆಯಿಂದ ಒಟ್ಟು 28 ಪ್ರಾಥಮಿಕ ಕುಕ್ಕುಟ ಸಹಕಾರಿ ಸಂಘಗಳು ಕರ್ನಾಟಕ ಸಹಕಾರ ಕುಕ್ಕುಟ ಮಹಾಮಂಡಳದಲ್ಲಿ ಸದಸ್ಯತ್ವವನ್ನು ಹೊಂದಿರುತ್ತವೆ. ಕರ್ನಾಟಕ ಸಹಕಾರ ಕುಕ್ಕುಟ ಮಹಾಮಂಡಳದ ವತಿಯಿಂದ 2019-20ನೇ ಸಾಲಿನಲ್ಲಿ ಬಡಕುಟುಂಬಗಳ ಆರ್ಥಿಕ ಸಬಲೀಕರಣ ಮತ್ತು ಸಾರ್ವಜನಿಕ ಪೌಷ್ಠಿಕ ಆಹಾರ ಪೂರೈಸುವ ದೃಷ್ಟಿಯಿಂದ ಗ್ರಾಮೀಣ ಪ್ರದೇಶದ ಬಡಜನರಿಗೆ 5 ವಾರದ 38 ಅಸ್ಸೀಲ್ ಕ್ರಾಸ್/ನಾಟಿ ಕೋಳಿ ಮರಿಗಳನ್ನು ವಿತರಿಸಲಾಗಿದೆ.

ಕರ್ನಾಟಕ ಸಹಕಾರ ಕುಕ್ಕುಟ ಮಹಾಮಂಡಳ ನಿಯಮಿತ, ಬೆಂಗಳೂರು ವತಿಯಿಂದ ಗ್ರಾಮೀಣ ಪ್ರದೇಶದ ಬಡ ಜನರಿಗೆ ಪಂಜರದ ಜೊತೆಗೆ 22 ವಾರದ ಬಿ.ವಿ. 380 ರ 20 ಕೋಳಿ ಘಟಕ ನೀಡುವ ಯೋಜನೆಯಡಿ ಜಿಲ್ಲೆಗೆ ಸಾಮಾನ್ಯ-15, ಪ.ಜಾ.-3, ಪ.ಪಂ.-2 ಒಟ್ಟು 20 ಗುರಿಗಳನ್ನು ನಿಗಧಿಪಡಿಸಲಾಗಿರುತ್ತದೆ.